# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1478 (1752)
2. ಮಾನ್ಯ ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ,
3. ಉತ್ತರಿಸಬೇಕಾದ ದಿನಾಂಕ : 23.03.2020
4. ಉತ್ತರಿಸುವ ಸಚಿವರು : ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ). | ರಾಜ್ಯದಲ್ಲಿ ಖಾಸಗಿ ಮೆಡಿಕಲ್ ಕಾಲೇಜುಗಳಲ್ಲಿ ಅಭ್ಯಸಿಸಿ, ಇನ್ಟರ್ನ್ ಶಿಪ್ ಮಾಡುತ್ತಿರುವ ವೈದ್ಯಕೀಯ ವಿದ್ಯಾರ್ಥಿಗಳಿಗೆ ಸ್ಟೈಪೆಂಡ್ ನೀಡದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ರಾಜ್ಯದಲ್ಲಿ ಸ್ಟೈಪೆಂಡ್ ನೀಡದೇ ಇರುವ ಖಾಸಗಿ ವೈದ್ಯಕೀಯ ಕಾಲೇಜುಗಳು ಯಾವವು; (ಪೂರ್ಣ ಮಾಹಿತಿ ನಿಡುವುದು) | ಹೌದು.<br><br>ಬಾಪೂಜಿ ವೈದ್ಯಕೀಯ ಕಾಲೇಜು, ದಾವಣಗೆರೆ ಹಾಗೂ ಕೆ.ಎಂ.ಸಿ. ವೈದ್ಯಕೀಯ ಕಾಲೇಜು, ಮಂಗಳೂರು ಇವರು ಶಿಷ್ಯವೇತನವನ್ನು ಪಾವತಿಸದೇ ಇರುವ ಬಗ್ಗೆ ಸದರಿ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳು ಸಲ್ಲಿಸಿದ್ದ ದೂರನ್ನು ಪರಿಶೀಲಿಸಲಾಗಿದೆ. ಎಂ.ಸಿ.ಐ ರೆಗ್ಯೂಲೇಷನ್ - 2000ರ ನಿಯಮ 13.3ರನ್ವಯ ಖಾಸಗಿ ವೈದ್ಯಕೀಯ ಕಾಲೇಜುಗಳು ತಮ್ಮದೇ ಆದ ಸ್ವಂತ ಆಸ್ಪತ್ರೆಗಳನ್ನು ಹೊಂದಬೇಕಾಗಿದ್ದು, ಗೃಹ ವೈದ್ಯ ಮತ್ತು ಸ್ನಾತಕೋತ್ತರ ವೈದ್ಯ ವಿದ್ಯಾರ್ಥಿಗಳಿಗೆ ಸಂಬಂಧಪಟ್ಟ ಕಾಲೇಜುಗಳೇ ಶಿಷ್ಯ ವೇತನವನ್ನು ಪಾವತಿಸಬೇಕಾಗುತ್ತದೆ. ಅದರಂತೆ ಈ 02 ಕಾಲೇಜಿನ ವಿದ್ಯಾರ್ಥಿಗಳಿಗೆ ಸದರಿ ಕಾಲೇಜುಗಳ ವತಿಯಿಂದಲೇ ಶಿಷ್ಯ ವೇತನವನ್ನು ಪಾವತಿಸುವಂತೆ ನಿರ್ದೇಶನ ನೀಡಿ ದಿನಾಂಕ:05.02.2020ರಂದು ಪತ್ರ ಹೊರಡಿಸಲಾಗಿದೆ. |
| ಆ) | ಸ್ಟೈಪೆಂಡ್ ನ್ನು ವೈದ್ಯಕೀಯ ವಿದ್ಯಾರ್ಥಿಗಳಿಗೆ ಎಂಸಿಐ ನಿಯಮಗಳ ಪ್ರಕಾರ, ಖಾಸಗಿ ಕಾಲೇಜುಗಳು ನೀಡಬೇಕಾಗಿರುವುದು ನ್ಯಾಯಬದ್ಧವಲ್ಲವೇ; ಹಾಗಿದ್ದಲ್ಲಿ, ರಾಜ್ಯ ಸರ್ಕಾರ ರೂಪಿಸಿರುವ ನಿಯಮಾವಳಿಗಳು ಯಾವವು; (ಪೂರ್ಣ ವಿವರ ನೀಡುವುದು) | ಹೌದು.<br><br>ಇನ್‌ಟರ್ನ್‌ಶಿಪ್ ಮಾಡುತ್ತಿರುವ ವೈದ್ಯಕೀಯ ವಿದ್ಯಾರ್ಥಿಗಳಿಗೆ ಸ್ಟೈಪಂಡ್ ನೀಡುವ ಬಗ್ಗೆ ಎಂ.ಸಿ.ಐ ನಿಯಮಾವಳಿಗಳಲ್ಲಿ ಯಾವುದೇ ಸ್ಪಷ್ಟ ಮಾಹಿತಿ ಇರುವುದಿಲ್ಲ ಹಾಗೂ ಖಾಸಗಿ ಕಾಲೇಜುಗಳಲ್ಲಿನ ವಿದ್ಯಾರ್ಥಿಗಳಿಗೆ ಸ್ಟೈಪಂಡ್ ನೀಡುವ ಕುರಿತಂತೆ ರಾಜ್ಯ ಸರ್ಕಾರವು ಯಾವುದೇ ನಿಯಮಗಳನ್ನು ರೂಪಿಸಿರುವುದಿಲ್ಲ. |
| ಇ) | ರಾಜ್ಯದಲ್ಲಿ ಕೆಲವೊಂದು ವೈದ್ಯಕೀಯ ಕಾಲೇಜುಗಳು ಮುಂಗಡವಾಗಿ ವೈದ್ಯಕೀಯ ವಿದ್ಯಾರ್ಥಿಗಳಿಂದ ವಸೂಲಿ ಮಾಡಿಕೊಂಡು, ತದನಂತರ ಅವರುಗಳಿಗೆ ಪಾವತಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಇಂತಹ ವೈದ್ಯಕೀಯ ಕಾಲೇಜುಗಳ ಮೇಲೆ ಸರ್ಕಾರ ಕೈಗೊಂಡ ಕ್ರಮಗಳೇನು? | ಬಂದಿಲ್ಲ. |

**ಸಂಖ್ಯೆ:** ಎಂಇಡಿ 40 ಆರ್‌ಜಿಯು 2020

**(ಡಾ: ಕೆ. ಸುಧಾಕರ್)**
ವೈದ್ಯಕೀಯ ಶಿಕ್ಷಣ ಸಚಿವರು